# ಕರ್ನಾಟಕ ವಿಧಾನ ಪರಿಷತ್ತು

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 515 (605) |
|---|---|---|
| ಸದಸ್ಯರ ಹೆಸರು | | ಶ್ರೀ ಹೆಚ್.ಎಂ. ರಮೇಶ ಗೌಡ<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | | 21-02-2022 |
| ಉತ್ತರಿಸಬೇಕಾದ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಪ್ರಶ್ನೆ | | ಉತ್ತರ |
| ಅ) | ಉನ್ನತ ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡುವ ಹಲವಾರು ಕಡತಗಳು ಕಳೆದ 2 ವರ್ಷಗಳಿಂದ ವಿಲೇವಾರಿಯಾಗದೇ ಸರ್ಕಾರದ ಹಂತದಲ್ಲಿಯೇ ವಿಳಂಬವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿದೆ.<br><br>ಕೋವಿಡ್-19 ಹಿನ್ನಲೆಯಲ್ಲಿ ಆರ್ಥಿಕ ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂಖ್ಯೆ:ಆಇ/3/ಬಿಇಎಂ/2020, ದಿ:06.07.2020 ರನ್ವಯ ಆರ್ಥಿಕ ಮಿತವ್ಯಯ ಆದೇಶ ಜಾರಿಗೊಳಿಸಿದ್ದರಿಂದ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಕಳೆದ 2 ವರ್ಷಗಳಲ್ಲಿ ಸ್ವೀಕೃತಗೊಂಡ ಪ್ರಸ್ತಾವನೆಗಳ ಪೈಕಿ ನೇಮಕಾತಿಗೆ ಸಂಬಂಧಿಸಿದಂತೆ ವಿವಿಧ ಹಂತಗಳಲ್ಲಿ ಪ್ರಸ್ತಾವನೆಗಳು ಬಾಕಿಯಿರುತ್ತವೆ.<br><br>ಮುಂದುವರೆದು, ದಿನಾಂಕ:29-01-2022 ರಂದು ಸಚಿವ ಸಂಪುಟ ಬ್ಯಾಕ್‌ಲಾಗ್ ಉಪ ಸಮಿತಿ ಸಭೆಯಲ್ಲಿ ಚರ್ಚಿಸಿದಂತೆ, ಖಾಸಗಿ ಅನುದಾನಿತ ಕಾಲೇಜುಗಳ ಯಾವ ಯಾವ ಕಾಲೇಜುಗಳಲ್ಲಿ ಯಾವ ಯಾವ ಹುದ್ದೆಯ ಬ್ಯಾಕ್‌ಲಾಗ್ ಹುದ್ದೆಗಳು ಖಾಲಿ ಇರುತ್ತವೆಯೆಂಬ ಬಗ್ಗೆ ವಿವರವಾದ ಮಾಹಿತಿಯನ್ನು ಒದಗಿಸುವಂತೆ ಆಯುಕ್ತರನ್ನು ಕೋರಲಾಗಿದ್ದು, ಮಾಹಿತಿ ಸ್ವೀಕೃತಗೊಂಡ ನಂತರ ಆದ್ಯತೆಯ ಮೇಲೆ ಕ್ರಮವಹಿಸಲಾಗುವುದು. |
| ಆ) | ಕಳೆದ 2 ವರ್ಷಗಳಲ್ಲಿ ಉನ್ನತ ಶಿಕ್ಷಣ ಇಲಾಖೆಯಲ್ಲಿ ಖಾಲಿ ಇರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಕೋರಿ ಸರ್ಕಾರಕ್ಕೆ ಸಲ್ಲಿಕೆಯಾಗಿರುವ ಪ್ರಸ್ತಾವನೆಗಳ ಸಂಖ್ಯೆ ಎಷ್ಟು; (ವಿಲೇವಾರಿಯಾದ, ವಿಲೇವಾರಿಯಾಗದಿರುವ ಪ್ರಸ್ತಾವನೆಗಳ ವಿವರವನ್ನು ಆದೇಶದ ಪ್ರತಿಯೊಂದಿಗೆ ವಿವರ ನೀಡುವುದು) | ಕಳೆದ 2 ವರ್ಷಗಳಲ್ಲಿ ಸುಮಾರು 71 ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡಲು ಆಡಳಿತ ಮಂಡಳಿಗಳಿಂದ ಪ್ರಸ್ತಾವನೆಗಳು ಸ್ವೀಕೃತಗೊಂಡಿರುತ್ತವೆ. ಆದರೆ ಆರ್ಥಿಕ ಮಿತವ್ಯಯ ಆದೇಶ ಜಾರಿಯಲ್ಲಿರುವ ಕಾರಣ ಸದರಿ ಪ್ರಸ್ತಾವನೆಗಳು ವಿಲೇವಾರಿಯಾಗಿರುವುದಿಲ್ಲ.<br><br>ವಿವರಗಳ ಬಗ್ಗೆ ಪಟ್ಟಿಯನ್ನು ಅನುಬಂಧದಲ್ಲಿ ಒದಗಿಸಿದೆ. |

| ಇ) | ಬ್ಯಾಕ್‌ಲಾಗ್ ಹುದ್ದೆಗಳ ಕಡತಗಳನ್ನು ಶೀಘ್ರ ವಿಲೇವಾರಿ ಮಾಡುವಂತೆ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಯಲ್ಲಿ ಚರ್ಚಿಸಿ ಸರ್ಕಾರಕ್ಕೆ ನಿರ್ದೇಶನ ನೀಡಿದ್ದರೂ ಸಹ ಕಡತಗಳು ವಿಲೇವಾರಿಯಾಗದೇ ವಿಳಂಬವಾಗುವುದಕ್ಕೆ ಸರ್ಕಾರದ ಕ್ರಮಗಳೇನು ಹಾಗೂ ಕಾರಣಗಳೇನು? (ಸಂಪೂರ್ಣ ವಿವರ ನೀಡುವುದು). | ಕ್ರಮ ಸಂಖ್ಯೆ (ಅ) ಮತ್ತು (ಆ) ನಲ್ಲಿ ವಿವರಿಸಲಾಗಿದೆ. |
|---|---|---|

ಇಡಿ 32 ಯುಪಿಸಿ 2022

**(ಡಾ: ಅಶ್ವಥ್ ನಾರಾಯಣ ಸಿ.ಎನ್.)**
ಉನ್ನತ ಶಿಕ್ಷಣ, ಐ.ಟಿ.-ಬಿ.ಟಿ. ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ಅನುಬಂಧ

## ಕಾಲೇಜು ಶಿಕ್ಷಣ ಇಲಾಖೆ

**ಕಳೆದ 2 ವರ್ಷಗಳ ಅವಧಿಯಲ್ಲಿ ಬ್ಯಾಕ್‌ಲಾಗ್ ಹುದ್ದೆಗಳ ಭರ್ತಿಗೆ ಸಂಬಂಧಿಸಿದಂತೆ ಈ ಕಛೇರಿಯಲ್ಲಿ ಸ್ವೀಕೃತಗೊಂಡಿರುವ ಪ್ರಸ್ತಾವನೆಗಳ ವಿವರ.**

| ಕ್ರಮ ಸಂಖ್ಯೆ | ಕಾಲೇಜಿನ ಹೆಸರು | ಬೋಧಕರು | ಬೋಧಕೇತರರು | ಒಟ್ಟು |
|---|---|---|---|---|
| 1 | 2 | 3 | 4 | 5 |
| 1 | ವಿ.ವಿ.ಎನ್ ಪದವಿ ಕಾಲೇಜು, ಬೆಂಗಳೂರು | 0 | 1 | 1 |
| 2 | ಎಂ.ಇ.ಎಸ್ ಪದವಿ ಕಾಲೇಜು, ಬೆಂಗಳೂರು | 1 | 0 | 1 |
| 3 | ವಿಜಯ ಪದವಿ ಕಾಲೇಜು, ಬೆಂಗಳೂರು | 1 | 0 | 1 |
| 4 | ನ್ಯಾಷನಲ್ ಪದವಿ ಕಾಲೇಜು, ಬೆಂಗಳೂರು | 2 | 2 | 4 |
| 5 | ಜೆ.ಎಸ್.ಎಸ್.ಮಹಾವಿದ್ಯಾಪೀಠ, ಮೈಸೂರು | 4 | 10 | 14 |
| 6 | ಶಾರದಾವಿಲಾಸ ವಿದ್ಯಾಸಂಸ್ಥೆ, ಮೈಸೂರು | 1 | 1 | 2 |
| 7 | ಭಾರತೀ ಎಜುಕೇಷನ್ ಟ್ರಸ್ಟ್, ಭಾರತೀನಗರ | 1 | 0 | 1 |
| 8 | ಪಿ.ಇ.ಎಸ್ ಕಲಾ, ವಿಜ್ಞಾನ & ವಾಣಿಜ್ಯ ಕಾಲೇಜು, ಮಂಡ್ಯ | 1 | 0 | 1 |
| 9 | ಶ್ರೀ.ಗೋಕರ್ಣನಾಥೇಶ್ವರ ಪದವಿ ಕಾಲೇಜು, ಮಂಗಳೂರು | 0 | 1 | 1 |
| 10 | ಅಕಾಡೆಮಿ ಆಫ್ ಜನರಲ್ ಎಜುಕೇಷನ್, ಮಣಿಪಾಲ | 3 | 0 | 3 |
| 11 | ಅದಮಾರು ಮಠ ಎಜುಕೇಷನ್ ಕೌನ್ಸಿಲ್, ಉಡುಪಿ (ಪೂರ್ಣ ಪ್ರಜ್ಞ ಕಾಲೇಜು) | 1 | 0 | 1 |
| 12 | ಶಾಂತಿವರ್ಧಕ ಶಿಕ್ಷಣ ಸಂಸ್ಥೆ, ಭಾಲ್ಕಿ | 3 | 2 | 5 |
| 13 | ತಾರಾನಾಥ ಶಿಕ್ಷಣ ಕಾಲೇಜು, ರಾಯಚೂರು | 1 | 0 | 1 |
| 14 | ನೃಪತುಂಗ ಕಾಲೇಜು, ಸೇಡಂ | 0 | 1 | 1 |
| 15 | ವೀರಶೈವ ವಿದ್ಯಾವರ್ಧಕ ಸಂಘ, ಬಳ್ಳಾರಿ | 3 | 1 | 4 |
| 16 | ಅಂಬೇಡ್ಕರ್ ಕಾಲೇಜು, ಹಳ್ಳಿಖೇಡ | 0 | 2 | 2 |
| 17 | ಅಂಬೇಡ್ಕರ್ ಕಾಲೇಜು & ಸಿದ್ಧಾರ್ಥ ಕಾನೂನು ಕಾಲೇಜು, ಕಲಬುರಗಿ | 0 | 4 | 4 |
| 18 | ಬಂಗೂರನಗರ ಕಾಲೇಜು, ದಾಂಡೇಲಿ, ಉತ್ತರ ಕನ್ನಡ | 1 | 0 | 1 |
| 19 | ಬಿ.ಎಲ್.ಡಿ.ಇ. ಶಿಕ್ಷಣ ಸಂಸ್ಥೆ, ವಿಜಯಪುರ | 1 | 0 | 1 |
| 20 | ಎಂ.ಪಿ.ಇ.ಸೊಸೈಟಿ ವ್ಯಾಪ್ತಿಯಲ್ಲಿ ಬರುವ ಎಸ್.ಡಿ.ಎಂ ಕಾಲೇಜು, ಹೊನ್ನಾವರ (ಉ.ಕ) | 0 | 1 | 1 |
| 21 | ಮಾರ್ಡನ್ ಎಜುಕೇಷನ್ ಸೊಸೈಟಿ, ಶಿರಸಿ | 0 | 1 | 1 |
| 22 | ಅಹಲ್ಯಾಬಾಯಿ ಪೀಠ ಎ.ಎ.ಪಿ ಕಲಾ ಮತ್ತು ವಾಣಿಜ್ಯ ಕಾಲೇಜು, ಚಿಕ್ಕೋಡಿ | 0 | 2 | 2 |
| 23 | ಕನಕದಾಸ ಶಿಕ್ಷಣ ಸಮಿತಿ, ಗದಗ್ | 0 | 1 | 1 |
| 24 | ಪಿ.ಪಿ.ಜಿ. ಅಂಧರ ಶಿಕ್ಷಣ ಸಮಿತಿ, ಗದಗ | 0 | 1 | 1 |

| 25 | ಎಸ್.ವಿ.ಎಂ ಕಾಲೇಜು, ಇಳಕಲ್ಲ | 1 | 0 | 1 |
|---|---|---|---|---|
| 26 | ಕಲ್ಪತರು ವಿದ್ಯಾಸಂಸ್ಥೆ, ಕಲ್ಪತರು ಪ್ರಥಮ ದರ್ಜೆ ಕಾಲೇಜು, ತಿಪಟೂರು | 1 | 2 | 3 |
| 27 | ನವೋದಯ ಶಿಕ್ಷಣ ಸಂಸ್ಥೆ, ಚಿಕ್ಕನಾಯಕನಹಳ್ಳಿ | 0 | 2 | 2 |
| 28 | ಸಿದ್ಧಗಂಗಾ ಶಿಕ್ಷಣ ಸಂಸ್ಥೆ, ತುಮಕೂರು | 2 | 1 | 3 |
| 29 | ಹೊಂಬೇಗೌಡ ಸಮೂಹ ಶಿಕ್ಷಣ ಸಂಸ್ಥೆ, ಕುವೆಂಪು ಪ್ರಥಮ ದರ್ಜೆ ಕಾಲೇಜು, ಚನ್ನಪಟ್ಟಣ | 2 | 2 | 4 |
| 30 | ಜಿಲ್ಲಾ ಮದಕರಿ ನಾಯಕ ವಿದ್ಯಾ ಸಂಸ್ಥೆ, ಚಿತ್ರದುರ್ಗ | 0 | 1 | 1 |
| 31 | ರಾಷ್ಟ್ರೀಯ ಶಿಕ್ಷಣ ಸಂಸ್ಥೆ (ರಿ), ಶಿವಮೊಗ್ಗ | 1 | 1 | 2 |
| | **ಒಟ್ಟು** | **31** | **40** | **71** |

R. Nagesha

**ಕಾಲೇಜು ಶಿಕ್ಷಣ ಹೆಚ್ಚುವರಿ ನಿರ್ದೇಶಕರು**